# ||ಶ್ರೀಮದಾನನ್ದತೀರ್ಥಭಗವತ್ಪಾದಾಚಾರ್ಯಃ ||



Tracking:

| Sr | Date | Remarks | |
|---|---|---|---|
| 1 | 05/05/2012 | **Typing Started on** | **By H K S** |
| 2 | 06/05/2012 | **Typing Ended on** | **By H K S** |
| 3 | 17/07/2012 | **First Proof Reading** | **By Narahari Rattihalli** |
| 4 | 20/07/2012 | **Proof Correction** | **By H K S** |
| 5 | | | |

## || ಶ್ರೀ ಹಯವದನ ರಂಗವಿಠ್ಠಲ ಗೋಪೀನಾಥೋ ವಿಜಯತೇ ||

*Blessed by Lord and with His divine grace, we are pleased to publish this Magnanimous Work of Sri Acharya Madhwa. It is a humble effort to make available this Great work to Sadhakas who are interested in the noble path of propagating Acharya Madhwa's Philosophy.*

*With great humility, we solicit the readers to bring to our notice any inadvertant typographical mistakes that could have crept in, despite great care. We would be pleased to incorporate such corrections in the next versions. Users can contact us, for editable version, to facilitate any value additions.*

*Contact: H K SRINIVASA RAO, N0 26, 2ND FLOOR, 15TH CROSS, NEAR VIDHYAPEETA CIRCLE, ASHOKANAGAR, BANGALORE 560050. PH NO. 26615951, 9901971176, 8095551774, Email :* **srkarc@gmail.com**

## ಕೃತಜ್ಞತೆಗಳು



ಜನ್ಮಾಂತರದ ಸುಕೃತದ ಫಲವಾಗಿ ಮಧ್ವಮತದಲ್ಲಿ ಜನಿಸಲು, ಪ್ರೇಮಮೂರ್ತಿಗಳಾಗಿ ನನ್ನ ಅಸ್ತಿತ್ವಕ್ಕೆ ಕಾರಣರಾದ, ಈ ಸಾಧನೆಗೆ ಅವಕಾಶಮಾಡಿದ, ನನ್ನ ಪೂಜ್ಯ ಮಾತಾ ಪಿತೃಗಳಾದ, ದಿವಂಗತರಾದ ಲಲಿತಮ್ಮ ಮತ್ತು ಕೃಷ್ಣರಾವ್ ಹೆಚ್ ಆರ್ ಅವರ ಸವಿ ನೆನಪಿನಲ್ಲಿ ಈ "ಅಧ್ಯಾತ್ಮ ಯಜ್ಞ"

"ಮಾತೃದೇವೋ ಭವ-ಪಿತೃದೇವೋಭವ-ಆಚಾರ್ಯದೇವೋಭವ"

1. ಸಂಸ್ಕೃತದಲ್ಲಿರುವ ಅನುನಾಸಿಕದ ಸ್ಪಷ್ಟವಾದ ವೈವಿಧ್ಯತೆಯು, ಕನ್ನಡ ಭಾಷೆಯಲ್ಲಿಯೂ ಇರುವಾಗ, ಅದರ ಜ್ಞಾನದ ಗಂಧವೇ ಇಲ್ಲದವರಂತೆ, ಕನ್ನಡಿಗರು ಇದನ್ನು ಕಡೆಗಣಿಸಿರುವುದು ಏಕೋ ತಿಳಿಯದಾಗಿದೆ. ಸರಿಯಾದ ಉಚ್ಚಾರಣೆಗಾಗಿ, ಸರಿಯಾದ ಅನುಸ್ವಾರಗಳು ಅವಶ್ಯಕ. ಆದ್ದರಿಂದ, ಶ್ರಮವಹಿಸಿ, ಸರಿಯಾದ ಅನುನಾಸಿಕ, ಅನುಸ್ವಾರಗಳನ್ನು ಬಳಸಲಾಗಿದೆ. ಓದುಗರು ಇದನ್ನು ಗಮನಿಸಿ ಮನ್ನಿಸಬೇಕಾಗಿ ಪ್ರಾರ್ಥಿಸಲಾಗಿದೆ.
2. ಗ್ರಂಥ ಋಣ: ಸ್ತೋತ್ರ ಮುಕ್ತಾವಳಿ ಮತ್ತು ವಿ ಬಾದರಾಯಣಾಚಾರ್ಯರ ಪ್ರಾತಃ ಸಂಕಲ್ಪ ಗದ್ಯದ ಕನ್ನಡ ಪದ್ಯರೂಪ

## || ಪ್ರಾತಃ ಸಙ್ಕಲ್ಪಗದ್ಯಮ್ ||

ಓಂ ಲೌಕಿಕವೈದಿಕಭೇದಭಿನ್ನವರ್ಣಾತ್ಮಕ – ಧ್ವನ್ಯಾತ್ಮಕ – ಅಶೇಷಶಬ್ದಾರ್ಥ – ಋಗಾದಿಸರ್ವೇವೇದಾರ್ಥ – ವಿಷ್ಣುಮನ್ತ್ರಾರ್ಥ – ಪುರುಷಸೂಕ್ತಾರ್ಥ– ಗಾಯತ್ರ್ಯರ್ಥ – ಶ್ರೀಮನ್ನಾರಾಯಣಾಷ್ಟಾಕ್ಷರಮನ್ತ್ರಾರ್ಥ – ವಾಸುದೇವದ್ವಾದಶಾಕ್ಷರಮನ್ತ್ರಾನ್ತರ್ಗತಾನ್ಯ - ಚತುರಕ್ಷರಾರ್ಥ – ವ್ಯಾಹೃತ್ಯರ್ಥ - ಮಾತೃಕಾಮನ್ತ್ರಾರ್ಥ – ಪ್ರಣವೋಪಾಸಕಾನಾಂ, ಪಾಪಾವಿದ್ಧ – ದೈತ್ಯಪೂಗಾವಿದ್ಧ ಶ್ರೀವಿಷ್ಣುಭಕ್ತ್ಯಾದ್ಯನಂತಗುಣಪರಿಪೂರ್ಣ ರಮಾವ್ಯತಿರಿಕ್ತ – ಪೂರ್ವಪ್ರಸಿದ್ಧ ವ್ಯತಿರಿಕ್ತ - ಅನನ್ತವೇದಪ್ರತಿಪಾದ್ಯಮುಖ್ಯತಮಾ – ಅನಂತಜೀವನಿಯಾಮಕಾ ಅನಂತರೂಪಭಗವತ್ಕಾರ್ಯಸಾಧಕ – ಪರಮದಯಾಳು – ಕ್ಷಮಾಸಮುದ್ರ - ಭಕ್ತವತ್ಸಲ – ಭಕ್ತಾಪರಾಧಸಹಿಷ್ಣು – ಶ್ರೀಮುಖ್ಯಪ್ರಾಣಾವತಾರಭೂತಾನಾಂ, ಅಜ್ಞ – ಜ್ಞಾನಾರ್ಥಿ – ಜ್ಞಾನಯೋಗ್ಯ ಭಗವತ್ಕೃಪಾಪಾತ್ರಭೂತ - ಸಲ್ಲೋಕಕೃಪಾಲು ಬ್ರಹ್ಮರುದ್ರಾದ್ಯರ್ಥಿತ – ಭಗವದಾಜ್ಞಾಂ ಶಿರಸಿ ಪರಮಾದರೇಣ ಅನರ್ಘ್ಯಶಿರೋರತ್ನವನ್ನಿಧಾಯ ತಥಾऽಶೇಷ ದೇವತಾಪ್ರಾರ್ಥನಾನಾಂ ಹಾರವದ್ಹೃಧಿ ನಿಧಾಯ, ಸರ್ವಸ್ವಕೀಯಸಜ್ಜನಾನುಗ್ರಹೇಚ್ಛಯಾ ಕರ್ಮಭುವ್ಯವತೀರ್ಣಾನಾಂ, ತಥಾऽವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ, ಸಕಲದುರ್ಮತಭಞ್ಜಕಾನಾಂ, ಅನಾದಿತಃ ಸತ್ಸಮ್ಪ್ರದಾಯಪರಮ್ಪರಾಪ್ರಾಪ್ತ ಶ್ರೀಮದ್ವೈಷ್ಣವಸಿದ್ಧಾನ್ತಪ್ರತಿಷ್ಠಾಪಕಾನಾಂ, ಅತ ಏವ ಭಗವತ್ಪರಮಾನುಗ್ರಹ ಪಾತ್ರಭೂತಾನಾಂ, ಸರ್ವದಾ ಭಗವದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ, ತಥಾ ಭಗವತಾ ದತ್ತವರಾಣಾಂ, ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರುಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದಮಾತ್ರೇಣ ಸ್ವಭಕ್ತಾಶೇಷಸಂಶಯಚ್ಛೇತ್ತೄಣಾಂ,

ಪ್ರಣವಾದ್ಯಶೇಷ ವೈಷ್ಣವಮನ್ತ್ರೋದ್ಧಾರಕಾಣಾಂ, ಸರ್ವದಾ ಸರ್ವವೈಷ್ಣವ ಮನ್ತ್ರಜಾಪಕಾನಾಂ, ಸಂಸಿದ್ಧಸಪ್ತಕೋಟಿಮಹಾಮನ್ತ್ರಾಣಾಂ, ಭಗವತಿ ಭಕ್ತ್ಯ-ತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತರೂಪಾಣಾಂ, ತತ್ರ ತತ್ರ ಪೃಥಕ್ ಪೃಥಕ್ ಭಗವತೋಽನನ್ತರೂಪೇಷು ಪೃಥಕ್ ಪೃಥಗ್ವೇದೋಕ್ತ – ತದನುಕ್ತ – ಭಾರತೋಕ್ತ – ತದನುಕ್ತ - ಸಮ್ಪ್ರದಾಯಾಗತ ಸ್ವೇತರ ಸ್ವಾಭಿನ್ನತಯಾಽಪ್ಯಶೇಷಶಕ್ತಿವಿಶೇಷಾಭ್ಯಾಂ, ಪೃಥಗ್ವ್ಯವಹಾರ ವಿಷಯ – ಸರ್ವಸಾಮರ್ಥ್ಯೋಪೇತ – ನಿರವಧಿಕಾನನ್ತ – ಅನವದ್ಯ - ಕಲ್ಯಾಣಗುಣಪರಿಪೂರ್ಣ – ಅನನ್ತಗುಣೋಪಸಂಹರ್ತೄಣಾಂ ತಥಾ ವೇದೋಕ್ತ – ಸರ್ವಕ್ರಿಯೋಪಸಂಹರ್ತೄಣಾಂ, ಏವಂ ಅನನ್ತರೂಪಾ - ಅವಯವಗುಣ ಕ್ರಿಯಾಜಾತ್ಯವಸ್ಥಾವಿಶಿಷ್ಟ ಭಗವದುಪಾಸಕಾನಾಂ, ಪರಮದಯಾಳೂನಾಂ, ಕ್ಷಮಾಸಮುದ್ರಾಣಾಂ, ಭಕ್ತವತ್ಸಲಾನಾಂ, ಭಕ್ತಾಪರಾಧಸಹಿಷ್ಣೂನಾಂ, ಸ್ವಭಕ್ತಾನ್ ದುರ್ಮಾರ್ಗಾತ್ - ಉದ್ಧೃತ್ಯ ಸನ್ಮಾರ್ಗಸ್ಥಾಪಕಾನಾಂ, ಸ್ವಭಕ್ತಂ ಮಾಮುದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಮನೇನಮುದ್ಧರೇತಿ ವಿಜ್ಞಾಪನಕರ್ತೄಣಾಂ, ಸರ್ವಜ್ಞಶಿರೋಮಣೀನಾಂ, ಅಶೇಷಗುರ್ವನ್ತರ್ಯಾಮಿಣಾಂ, ಸದಾಭಗವತ್ಪರಾಣಾಂ, ಭಗವತೋಽನ್ಯತ್ರ ಸರ್ವವಸ್ತುಷು ಮನಃಸಙ್ಗರಹಿತಾನಾಂ, ಸರ್ವತ್ರ ಸರ್ವದಾ ಸರ್ವಾಕಾರ – ಸರ್ವಾಧಾರ – ಸರ್ವಾಶ್ರಯ – ಸರ್ವೋತ್ಪಾದಕ – ಸರ್ವಪಾಲಕ – ಸರ್ವಸಂಹಾರಕ - ಸರ್ವನಿಯಾಮಕ – ಸರ್ವಪ್ರೇರಕ – ಸರ್ವಪ್ರವರ್ತಕ – ಸರ್ವನಿವರ್ತಕ – ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬನ್ಧಮೋಕ್ಷಪ್ರದ – ಸರ್ವಸತ್ತಾಪ್ರದ – ಸರ್ವಶಬ್ದವಾಚ್ಯ – ಸರ್ವಶಬ್ದಪ್ರವೃತ್ತಿನಿಮಿತ್ತ – ಸರ್ವಗುಣಾತಿಪರಿಪೂರ್ಣಮುಖ್ಯತಮ – ಸರ್ವದೋಷಾತಿದೂರ – ಸರ್ವಾಚಿನ್ತ್ಯ – ಸರ್ವೋತ್ತಮ – ಸರ್ವೇಶ್ವರ – ಸರ್ವಾತ್ಯನ್ತವಿಲಕ್ಷಣ – ಸ್ವಗತಭೇದವಿವರ್ಜಿತತ್ವಾದಿನಾ – ಭಗವದ್ರಷ್ಟೄಣಾಂ, ಅಭಿಮಾನಾದಿ

ಸರ್ವದೋಷದೂರಾಣಾಂ, ಅಸೂಯೇರ್ಷ್ಯಾದಿ – ಅಶೇಷ –
ಮನೋದೋಷನಿವರ್ತಕಾಂ ನಿತ್ಯಾಪರೋಕ್ಷೀಕೃತ - ರಮಾಯುಕ್ತ –
ಅಶೇಷಭಗವದ್ರೂಪಾಣಾಂ, ಅತ ಏವ ವಿಲೀನಾಶೇಷ - ಪ್ರಕೃತಿಬನ್ಧಾನಾಂ
ಅಥ ಏವ ದೂರೋತ್ಸಾರಿತ ಅಶೇಷ – ಅನಿಷ್ಠಾನಾಂ, ಅಥ ಏವ
ಅಶೇಷಭಕ್ತಾಶೇಷಾನಿಷ್ಟ ನಿವರ್ತಕಾನಾಂ, ಪ್ರಣವೋಪಾಸಕಾನಾಂ,
ಅಸ್ಮದಾದಿಗುರೂಣಾಂ, ಶ್ರೀಮದಾನನ್ದತೀರ್ಥಶ್ರೀಮಚ್ಚರಣಾನಾಂ
ಅನ್ತರ್ಯಾಮಿನ್ ಅನಿರುದ್ಧ – ಪ್ರದ್ಯುಮ್ನ – ಸಙ್ಕರ್ಷಣ – ವಾಸುದೇವಾತ್ಮಕ –
ಶ್ರೀಮಧ್ವವಲ್ಲಭ – ಶ್ರೀಲಕ್ಷ್ಮೀವೇದವ್ಯಾಸಾತ್ಮಕ – ಅಣ್ಡಸ್ಥಿತ –
ಅನನ್ತರೂಪಾವಯವ – ಗುಣಕ್ರಿಯಾ – ಜಾತ್ಯವಸ್ಥಾವಿಶಿಷ್ಟ ರಮಾಯುಕ್ತ –
ಕ್ಷೀರಾಬ್ಧಿ – ಶೇಷಶಾಯಿ – ಶ್ರೀಪದ್ಮನಾಭಾತ್ಮಕ – ಅಣ್ಡಾದ್ಬಹಿರಭಿವ್ಯಕ್ತ –
ಶುದ್ಧಸೃಷ್ಟಿತ್ವೇನಾಭಿಮತ – ಶ್ರೀಚತುರ್ಮುಖ – ಮುಖ್ಯಪ್ರಾಣೋಪಾಸ್ಯತ್ವಾದಿ
– ಅನೇಕಪ್ರಯೋಜನಕ – ಅನನ್ತಾನನ್ತರೂಪ – ಮೂಲಭೂತ ತಥಾऽಶೇಷ –
ಜಗತ್ಪಾಲನಪ್ರಯೋಜನಕ – ಶಾನ್ತಿಪತಿ – ಅನಿರುದ್ಧ – ಮೂಲಭೂತಾऽಶೇಷ
ಜಗತ್ಸೃಷ್ಟಿಪ್ರಯೋಜನಕ - ಕೃತಿಪತಿ ಪ್ರದ್ಯುಮ್ನ – ಮೂಲಭೂತ –
ಜಗತ್ಸಂಹಾರಪ್ರಯೋಜನಕ ಜಯಾಪತಿ ಸಙ್ಕರ್ಷಣ – ಮೂಲಭೂತ ತಥಾ
ಸ್ವಸ್ವ – ಸಮಗ್ರಯೋಗ್ಯತಾಭಿಜ್ಞ – ಪರಮಾನುಗ್ರಹಶೀಲ – ಭಗವತ್ಪ್ರೇರಿತ –
ಚತುರ್ಮುಖಾದಿ – ಸದ್ಗುರೂಪದಿಷ್ಟ – ಸ್ವಸ್ವಯೋಗ್ಯ – ಭಗವದ್ರೂಪ –
ಗುಣೋಪಾಸನಯಾ ಸಞ್ಜಾತ – ಸ್ವಸ್ವಯೋಗ್ಯ – ಭಗವದ್ರೂಪ –
ವಿಶೇಷದರ್ಶನಭೋಗಾಭ್ಯಾಂ – ವಿನಷ್ಟಾನಿಷ್ಟ – ಸಞ್ಚಿತ – ಪ್ರಾರಬ್ಧಲಕ್ಷಣ –
ಅಶೇಷಕರ್ಮಾಣಾಂ, ಸ್ವಸ್ವಯೋಗ್ಯತಾನುಸಾರೇಣ
ಸಮ್ಪೂರ್ಣಸಾಧನಾನಾಂ, ಪೂರ್ವಕಲ್ಪೇ ಬ್ರಹ್ಮಣಾ ಸಹ
ವಿರಜಾನದೀಸ್ನಾನೇನ ತ್ಯಕ್ತಲಿಙ್ಗಾನಾಂ, ತಥಾ ವಿನಷ್ಟಾವಶಿಷ್ಟೇಷ್ಟ – ಅಶೇಷ
– ಪ್ರಾರಬ್ಧಕರ್ಮಾಣಾಂ ಪ್ರಲಯಕಾಲೇ ಭಗವದುದರೇ ವಸತಾಂ
ಆನನ್ದಮಾತ್ರವಪುಷಾಂ ತದನುಭವರಹಿತಾನಾಂ ಸ್ವಸ್ವಯೋಗ್ಯ

ಭಗವದ್ರೂಪ ವಿಶೇಷಧ್ಯಾನರತಾನಾಂ, ಸೃಷ್ಟಿಕಾಲೇ ಭಗವದಾಜ್ಞಯಾ
ಭಗವದುದರಾದ್ಬಹಿರ್ನಿರ್ಗತಾನಾಂ ಶ್ರೀಶ್ವೇತದ್ವೀಪದರ್ಶನಂ ನಿಮಿತ್ತೀಕೃತ್ಯ
ಪ್ರಧಾನಾವರಣಭೂತಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯ –
ಆನನ್ದಾವಿರ್ಭಾವಲಕ್ಷಣ – ಮುಕ್ತಿಪ್ರಧಾನಪ್ರಯೋಜನಕ – ಮಾಯಾಪತಿ
ಶ್ರೀವಾಸುದೇವಾತ್ಮಕ –ಲಕ್ಷ್ಮ್ಯಾತ್ಮಕ – ಪ್ರಲಯಾಬ್ಧಿಸ್ಥ –
ಶ್ರೀವಟಪತ್ರಶಾಯ್ಯಶೇಷಜಗದುದರ – ಅಶೇಷಮುಕ್ತ –
ನಾಭಿದೇಶೋರ್ಧ್ವಭಾಗ – ಕುಕ್ಷ್ಯೈಕ್ಯದೇಶ – ತ್ರಿವಿಧಾಶೇಷಸಂಸಾರಿ –
ನಾಭಿದೇಶಾಖಿಲತಮಃಪತಿತ – ನಾಭ್ಯಧೋಭಾಗದೇಶ –
ಶ್ರೀಭೂಮ್ಯಾಲಿಙ್ಗಿತ – ಕಾಲಾದಿಚೇಷ್ಟಕ – ಪರಮಾಣ್ವಾದಿ –
ಅಶೇಷಕಾಲಾವಯವ – ಸೃಷ್ಟ್ಯಾದಿಕರ್ತೃಶೇಷನಾಮಕ –
ಪರಮಪುರುಷನಾಮಕ – ಶ್ರೀಚತುರ್ಮುಖ – ಮುಖ್ಯಪ್ರಾಣೋಪಾಸಿತಚರಣ
– ಅನಿರುದ್ಧಾದಿಚತೂರೂಪಾತ್ಮಕ – ಗಾಯತ್ರೀನಾಮಕ – ಸವಿತೃನಾಮಕ –
ರೂಪವಿಶೇಷಾತ್ಮಕ – ವ್ಯಾಪ್ತರೂಪ – ಬೃಹಚ್ಛರೀರ – ಶೂನ್ಯಾಭಿದ –
ಕಾಲಾಭಿದ – ಕೇವಲಾಭಿದ – ಬ್ರಹ್ಮಾಭಿದ – ಅನನ್ತಾಭಿದ –
ರೂಪವಿಶೇಷಾತ್ಮಕ – ನಿರುಪಚರಿತ – ಮೂಲರೂಪನಿರುಪಚರಿತ –
ವ್ಯಾಪ್ತಪ್ರತಿಪಾದ್ಯ- ಅನನ್ತತೇಜಃ ಪುಞ್ಜತಾದೃಶ –
ರಮಾಯುಕ್ತರೂಪವಿಶೇಷಾತ್ಮಕ – ಗಾಯತ್ರೀಭೂತವಾಕ್ –
ಪೃಥಿವೀಶರೀರಹೃದಯಭೇದೇನ ಷಡ್ವಿಧಗಾಯತ್ರೀನಾಮಕ
ಲೋಕವೇದಸಮೀರ – ರಮಾನ್ತರ್ಗತ – ಪ್ರಣವಾಖ್ಯತುರೀಯಪಾದೋಪೇತ
– ಗಾಯತ್ರೀಪಾದಚತುಷ್ಟಯಪ್ರತಿಪಾದ್ಯ – ವೈಕುಣ್ಠಸ್ಥಿತ – ಅನನ್ತಾಸನಸ್ಥಿತ
– ಶ್ವೇತದ್ವೀಪಸ್ಥಿತ – ಸರ್ವಜೀವಸ್ಥಿತ – ರೂಪಭೇದೇನ ಚತೂರೂಪಾತ್ಮಕ
ನಿರುಪಚರಿತ – ಸರ್ವವಾಗರ್ಥಪ್ರತಿಪಾದಕ ಶ್ರೀದೇವ್ಯಾದಿ –
ರಮಾರೂಪಾಷ್ಟಕ – ಅಭಿಮನ್ಯಮಾನ –
ಚಕ್ರಶಙ್ಖವರಾಭಯಯುಕ್ತಹಸ್ತಚತುಷ್ಟಯೋಪೇತ –

ಪ್ರದೀಪವರ್ಣ – ಸರ್ವಾಭರಣಭೂಷಿತ – ವಿಶ್ವಾದಿಭಗವದ್ರೂಪಾಷ್ಟಕ – ಪ್ರತಿಪಾದಕ – ಅಕಾರಾದ್ಯಷ್ಟಾಕ್ಷರಾತ್ಮಕ – ಶ್ರೀಮದ್ವೃಣವಾದ್ಯಷ್ಟಮಹಾಮನ್ತ್ರ – ಪ್ರತಿಪಾದ್ಯಷ್ಟರೂಪಾತ್ಮಕ – ಮನ್ತ್ರಾಧ್ಯಾಯೋಕ್ತ – ಭೂವರಾಹಾದ್ಯಶೇಷ – ವೈಷ್ಣವಮನ್ತ್ರಪ್ರತಿಪಾದ್ಯ – ಭೂವರಾಹಾದ್ಯಶೇಷರೂಪವಿಶೇಷಾತ್ಮಕ – ರಮಾದಿಮನ್ತ್ರಪ್ರತಿಪಾದ್ಯ – ರಮಾದಿನಿಷ್ಠ – ರಮಾದಿನಾಮಕರೂಪ - ವಿಶೇಷಾತ್ಮಕ ಶ್ರೀಲಕ್ಷ್ಮೀನೃಸಿಂಹಾತ್ಮಕ – ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ದೇಶಕಾಲಾಧಿಪತೇ ದೇಹೇನ್ದ್ರಿಯಾದಿಪತೇ ಸೂರ್ಯವಂಶಧ್ವಜ ರಘುಕುಲತಿಲಕ – ಲಕ್ಷ್ಮಣ – ಭರತ – ಶತ್ರುಘ್ನಾಗ್ರಜ ಶ್ರೀಮದ್- ಹನುಮದುಪಾಸಿತಚರಣ ಸೀತಾಪತೇ ಶ್ರೀರಾಮಚನ್ದ್ರ ! ತ್ವದಾಜ್ಞಯಾ ತ್ವತ್ಪ್ರಸಾದಾತ್ ತ್ವತ್ಪ್ರೇರಣಯಾ ತ್ವತ್ಪ್ರೀತ್ಯರ್ಥಂ ತ್ವಾಮುದ್ದಿಶ್ಯ ತ್ವಾಮನುಸ್ಮರನ್ನೇವ ತ್ವದಾಜ್ಞಯಾ ನಿಯತೇನ ಮನ್ನಿಯಾಮಕೇನ ಸತ್ತಾಪ್ರದವಾಯುನಾಮಕ ಚೇಷ್ಟಾಪ್ರದಪ್ರಾಣನಾಮಕ – ಧಾರಣಪ್ರದಧರ್ಮನಾಮಕ – ಮುಕ್ತಿಪ್ರದಭಕ್ತಿನಾಮಕ - ರೂಪವಿಶೇಷೈಃ – ಮದ್ಧೃದಿಸ್ಥಿತೇನ ಪರಮದಯಾಲುನಾ ಕ್ಷಮಾಸಮುದ್ರೇಣ ಭಕ್ತವತ್ಸಲೇನ ಭಕ್ತಾಪರಾಧಸಹಿಷ್ಣುನಾ ಸರ್ವಸ್ವಾಮಿನಾ ಸರ್ವಪ್ರೇರಕೇಣ ಸರ್ವತಾತ್ವಿಕದೇವತಾಪ್ರೇರಕೇಣ, ಸರ್ವತಾತ್ವಿಕಾಸುರಭಞ್ಜಕೇನ ತಥಾ ತತ್ಪ್ರೇರಣಾಪ್ರಯುಕ್ತಾಶೇಷದುರ್ಮತಭಞ್ಜಕೇನ, ಅತ ಏವ ಪ್ರಭಞ್ಜನಶಬ್ದವಾಚ್ಯೇನ, ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಬೋಧಕೇನ, ಸರ್ವಕರ್ಮಕರ್ತ್ರಾ ಸರ್ವಕರ್ಮಕಾರಯಿತ್ರಾ ಸರ್ವಕರ್ಮಸ್ವಾಮಿನಾ ಸರ್ವಕರ್ಮಸಮರ್ಪಕೇಣ ಸರ್ವಕರ್ಮಫಲಭೋಕ್ತ್ರಾ ಸರ್ವಕರ್ಮಫಲಭೋಜಯಿತ್ರಾ ಸರ್ವಕರ್ಮಪ್ರೇರಕೇಣ ಸರ್ವಕರ್ಮೋದ್ಬೋಧಕೇನ ಸರ್ವಕರ್ಮಶುದ್ಧಿಪ್ರದೇನ ಸರ್ವಕರ್ಮಸಿದ್ಧಿಪ್ರದೇನ ಸರ್ವಕರ್ಮನಿಷ್ಟೇನ ಸರ್ವಕರ್ಮಸಾಕ್ಷಿಣಾ ಸರ್ವಕರ್ಮನಿಷ್ಟಭಗವದ್ರೂಪೋಪಾಸಕೇನ ಅಥ ಏವ

ಅಶೇಷಜೀವನಿಃಸಙ್ಘ್ನಾನಾದಿಕಾಲೀನ – ಧರ್ಮಾಧರ್ಮ
ದ್ರಷ್ಟೃಸ್ವೇಚ್ಛಯೋದ್ಬೋದಕೇನ ತದ್ವಾಚಕ – ಕಪಿಲೋಪಾಸಕೇನ,
ರಮಾವ್ಯತಿರಿಕ್ತ – ಪೂರ್ವಪ್ರಸಿದ್ಧವ್ಯತಿರಿಕ್ತ –
ಅನನ್ತವೇದಪ್ರತಿಪಾದ್ಯಮುಖ್ಯತಮೇನ, ಅನನ್ತಗುಣಪರಿಪೂರ್ಣೇನ
ಸರ್ವದೋಷದೂರೇಣ ತ್ವಚ್ಚಿತ್ತಾಭಿಜ್ಞೇನ ತ್ವಚ್ಚಿತ್ತಾನುಸಾರಿಚಿತ್ತೇನ
ತ್ವತ್ಪರಮಾನುಗ್ರಹಪಾತ್ರಭೂತೇನ ಮದ್ಯೋಗ್ಯತಾಭಿಜ್ಞೇನ
ಶ್ರೀಭಾರತೀರಮಣೇನ ರುದ್ರಾದ್ಯಶೇಷತಾತ್ವಿಕದೇವತೋಪಾಸಿತ –
ಚರಣೇನ ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ ತ್ವದುಪಾಸಕೇನ,
ಶ್ರೀಮುಖ್ಯಪ್ರಾಣೇನ ಪ್ರೇರಿತಃಸನ್ ತ್ವತ್ಸಂಸ್ಮೃತಿಪೂರ್ವಕಂ ಶಯನಾತ್
ಸಮುತ್ಥಾಯಾದ್ಯತನಂ ಸ್ವವರ್ಣಾಶ್ರಮೋಚಿತಂ ದೇಶ – ಕಾಲ –
ಅವಸ್ಥೋಚಿತಂ ನಿತ್ಯ-ನೈಮಿತ್ತಕ –ಕಾಮ್ಯಭೇದೇನ ತ್ರಿವಿಧಂ
ತ್ವತ್ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ ।
ಮದಾಜ್ಞಾಕಾರಿಭಿಃ – ವಿದ್ಯಾಸಮ್ಬನ್ಧಿಭಿಃ – ದೇಹಸಮ್ಬನ್ಧಿಭಿಶ್ಚ – ತ್ವದೀಯೈಃ –
ಅಶೇಷಜನೈಃ – ತ್ವತ್ಸರ್ವಕರ್ಮಕರ್ತೃತ್ವ – ಕಾರಯಿತೃತ್ವಾದಿ –
ಅನುಸನ್ಧಾನಪೂರ್ವಕಂ ಕಾರಯಿಷ್ಯೇ ಚ ॥

|| ಇತಿ ಶ್ರೀರಾಘವೇನ್ದ್ರಾಖ್ಯಯತಿನಾ ಕೃತಮಞ್ಜಸಾ
ಪ್ರಾತಃಸಙ್ಕಲ್ಪಗದ್ಯಂ ಸ್ಯಾತ್ ಪ್ರೀತ್ಯೈ ಮಾಧವಮಧ್ವಯೋಃ ||

## || ಸರ್ವಸಮರ್ಪಣಗದ್ಯಮ್ ||

ಜಾಗ್ರತ್ಸ್ವಪ್ನಸುಷುಪ್ತ್ಯಾಖ್ಯ- ಅವಸ್ಥಾತ್ರಯನಿಯಾಮಕ – ಮದನ್ತರ್ಯಾಮಿ
ಮುಖ್ಯಪ್ರಾಣಾನ್ತರ್ಗತ ವಿಶ್ವ- ತೈಜಸ - ಪ್ರಾಜ್ಞಾತ್ಮಕ
ಹಿಙ್ಕಾರಾದಿಷಟ್ಸಾಮಪ್ರತಿಪಾದ್ಯ
ಷಟ್ಕಾಲನಿಯಾಮಕ ಅನಿರುದ್ಧ – ಪ್ರದ್ಯುಮ್ನ – ಸಙ್ಕರ್ಷಣ – ವಾಸುದೇವ –
ವರಾಹ – ನಾರಸಿಂಹ – ಷಣ್ಮೂರ್ತ್ಯಾತ್ಮಕ – ಸ್ವಹೃದಯಮಧ್ಯಸ್ಥಿತ –
ಸುಷುಮ್ನಾನಾಡೀದಕ್ಷಿಣಪಾರ್ಶ್ವಸ್ಥಿತ – ಪಞ್ಚಾಶತ್ಸಙ್ಖ್ಯಾಕ –
ಪಿಙ್ಗಳಾನಾಡೀಷು ತದುತ್ತರಪಾರ್ಶ್ವಸ್ಥಿತ – ತಾವತ್ಸಙ್ಖ್ಯಾಕ –
ವ್ಯಞ್ಜನಾರ್ಣಪ್ರತಿಪಾದ್ಯ – ತಾವತ್ಸಙ್ಖ್ಯಾಕೇಡಾನಾಡೀಷು ತತ್ತದ್ಯೋಗ್ಯ –
ತತ್ತತ್ಕಾಲಾನುಸಾರಪ್ರಾಪ್ತ – ತತ್ತನ್ನಾಡೀಸ್ಥಿತ – ಬೃಹತೀಛನ್ದ –
ಋಕ್ಸಹಸ್ರಗತ - ಷಟ್ತ್ರಿಂಶತ್ಸಹಸ್ರ – ಸ್ವರಾಖ್ಯಾಕ್ಷರಪ್ರತಿಪಾದ್ಯ ತನ್ನಿಷ್ಠ
ತನ್ನಿಯಾಮಕ ಪ್ರಾತರ್ಮಧ್ಯನ್ದಿನಸಾಯಮಾಖ್ಯ- ಸವನತ್ರಯ –
ತತ್ತತ್ಕಾಲೀನ – ತದಭಿಮಾಮಿ – ವಸುರುದ್ರಾದಿತ್ಯೋಪಾಸ್ಯ –
ಪರಮಾಣುಸಮ್ಬನ್ಧಿ – ತಾವತ್ಸಙ್ಖ್ಯಾಕ – ಅಹರ್ನಿಯಾಮಕ – ಅಹರ್ನಾಮಕ
ಮುಖ್ಯಪ್ರಾಣೋಪಾಸ್ಯ ರಮಾಯುಕ್ತ ಪುರುಷರೂಪಾತ್ಮಕ
ಪ್ರಾದೇಶಮಾತ್ರಹೃದಯವ್ಯಾಪಕ ಪ್ರಾದೇಶಪರಿಮಿತಸ್ಥಾನೇಶಾತ್ಮಕ
ದೇಹಾನ್ತರ್ಗತ ದೇಹಾಙ್ಗುಷ್ಠಪರಿಮಿತ ಜೀವಾನ್ತರ್ಗತ ಜೀವಾಙ್ಗುಷ್ಠಪರಿಮಿತ
ಸ್ವಹೃದಯಕಮಲಕರ್ಣಿಕಾಮೂಲಸ್ಥಿತ ಮೂಲೇಶಾತ್ಮಕ
ತಾವತ್ಪರಿಮಿತಕರ್ಣಿಕಾಗ್ರಸ್ಥಿತ ಬಿಮ್ಬರೂಪೇ
ಜೀವೇಶತ್ವದೃಷ್ಟ್ಯಾ ಽನಾದಿಕಾಲತಃ
ಪ್ರಾಪ್ತಮದೀಯಶುಭಾಶುಭಕರ್ಮಣೋರ್ಮಧ್ಯೇ
ಶುಭಕರ್ಮಾನುಸಾರತಸ್ತತ್ಪ್ರೇರಿತೇನ ಮುಖ್ಯಪ್ರಾಣೇನ
ತತ್ತ್ವಾಭಿಮಾನಿದೇವತಾದ್ವಾರಾನುಕಾರಿತ – ಅವಸ್ಥಾತ್ರಯನಿಯಾಮಕ –
ಅನುಭವಕಾಲಘಟಿತ – ಶ್ರೀವಿಷ್ಣುಸ್ವಾತನ್ತ್ರ್ಯ – ಸ್ಮೃತಿಪ್ರದಾನಕ ನಿತ್ಯ-

ನೈಮಿತ್ತಿಕ – ಕಾಮ್ಯಭೇದೇನ ತ್ರಿವಿಧವಿದ್ಯಾಶ್ರಿತ –
ಸ್ವವರ್ಣಾಶ್ರಮೋಚಿತಸಙ್ಕಲ್ಪಿತ - ಭಗವತ್ಪೂಜಾತ್ಮಕ
ಕರ್ಮಫಲಜನ್ಯಫಲೇನ - ಅಪರೋಕ್ಷಜ್ಞಾನಾತ್
ಪೂರ್ವಮನ್ತಃಕರಣಶುದ್ಧಿದ್ವಾರಾ ತದುಪಾಸಕೇನ ತತಃ ಪರಂ
ಭಗವದಿಚ್ಛಯಾ ಪ್ರಾಪ್ತ ನಿಜಗುರೂಪದಿಷ್ಟ – ಸ್ವಬಿಮ್ಬವಿಷಯಕ –
ಪೂರ್ಣಸಚ್ಚಿದಾನನ್ದಾತ್ಮಕ ಚತುರ್ಗುಣಾದ್ಯುಪಾಸನ –
ಜಿಜ್ಞಾಸಾದ್ಯುಪಾಸಾದಿಭಿಃ ಸ್ವಬಿಮ್ಬಾಪರೋಕ್ಷಜ್ಞಾನೋತ್ಪಾದಕೇನ
ಮನುಷ್ಯೋತ್ತಮಮಾರಭ್ಯ ಚತುರ್ಮುಖಪರ್ಯನ್ತಾನಾಂ
ಪಞ್ಚವಿಧಮುಕ್ತಿಯೋಗ್ಯಾನಾಂ ಚ ಸ್ವಬಿಮ್ಬೋಪಾಸಿಭಿಃ ಲಿಙ್ಗಾಪಗಮೇ
ಸ್ವರೂಪಾನನ್ದಾವಿರ್ಭಾವ – ವೈಚಿತ್ರ್ಯಾನನ್ದಪ್ರದಜ್ಞಾನೇನ ತ್ವಯಿ
ಸಮರ್ಪಿತೇನ ತ್ವತ್ಪೂಜೈವಾಸ್ತು ।
ತಥಾ ಮದೀಯಶುಭಾಶುಭ – ಕರ್ಮಣೋರ್ಮಧ್ಯೇ
ಅಶುಭಕರ್ಮಾನುಸಾರೇಣ ತ್ವತ್ಪ್ರೇರಿತಮುಖ್ಯಪ್ರಾಣೇನ ತತ್ತ್ವಾಭಿಮಾನಿ -
ಅಸುರಮಾರಭ್ಯ ಕಲಿಪರ್ಯನ್ತಾನಾಂ ತಮೋಯೋಗ್ಯಾನಾಂ
ಪಾಪಬಾಧಿಭಿರ್ಗದಾಯುಧಪ್ರದಾನೇನ ಮಹಾತಮಸಿ ಸ್ಥಿತಾನಾಂ
ದುಃಖಾನುಭವೇನ ಸ್ವರೂಪಭೂತದುಃಖಾತಿಶಯಪ್ರದಾತೇತಿ ಜ್ಞಾನೇನ
ತ್ವಯಿ ಸಮರ್ಪಿತೇನ ತ್ವತ್ಪೂಜೈವಾಸ್ತು ॥

॥ ಇತಿ ಶ್ರೀರಾಘವೇನ್ದ್ರತೀರ್ಥಕೃತಂ ಸರ್ವಸಮರ್ಪಣಗದ್ಯಮ್ ॥



# ಪ್ರಾತಃ ಸಂಕಲ್ಪ ಗದ್ಯ – ಕನ್ನಡ ಪದ್ಯರೂಪ

ಲೌಕಿಕವು ವೈದಿಕವು ಎಂಬ ಭಿನ್ನತೆ ತೋರಿ
ವರ್ಣಗಳು ಧ್ವನಿಗಳು, ಸಕಲ ಶಬ್ದಾರ್ಥಗಳು,
ಋಗ್ವೇದ ಮೊದಲಾದ ನಿಖಿಲ ವೇದಾರ್ಥಗಳು,
ವಿಷ್ಣುಮಂತ್ರದ ಅರ್ಥ, ಶ್ರೀಪುರುಷಸೂಕ್ತಾರ್ಥ,
ಗಾಯತ್ರಿ ಮಂತ್ರಾರ್ಥ, ವಾಸುದೇವದ್ವಾದ
ಶಾಷ್ಟಾಕ್ಷರೀ ಮೊದಲ ಎಂಟು ಅಕ್ಷರದರ್ಥ,
ನಾರಾಯಣಾಷ್ಟಾಕ್ಷರೀ ಮಂತ್ರದರ್ಥವನು,
ವಾಸುದೇವ ದ್ವಾದಶಾಷ್ಟಕ್ಷರಿಯಲ್ಲಿ
ಕಡೆಯ ನಾಲ್ಕಕ್ಷರದ ಅರ್ಥಗರ್ಭಿತವಾಗಿ,
ವ್ಯಾಹೃತಿಯ ಅರ್ಥವನು ಮಾತೃಕಾಮಂತ್ರಾರ್ಥ
ಇವನ್ನೆಲ್ಲ ಕೂಡಿರುವ ಪ್ರಣವಮಂತ್ರವ ನಿತ್ಯ
ಚೆನ್ನಾಗಿ ಜಪಿಸುತಿಹ ಪವಮಾನರಿವರು;

ಪಾಪಲೇಪವು ಇಲ್ಲ ದೈತ್ಯರುಪಟಳವಿಲ್ಲ ;
ಶ್ರೀವಿಷ್ಣು ಭಕ್ತ್ಯಾದಿ ಗುಣ ಪೂರ್ಣರಾಗಿಹರು,
ರಮೆಯ ಹೊರತಂತೆಯೇ, ಪ್ರಣವ ಸೂಚಿತ ಹೊರತು
ಸಕಲ ವೇದಗಳಿಂದ ಸ್ತುತ್ಯದೇವರ್ಕಳೊಳು
ಮುಖ್ಯತಮರೆನಿಸುವರು; ಜೀವರ ನಿಯಾಮಕರು ;
ಪರಮ ದಯೆಉಳ್ಳವರು, ಕ್ಷಮೆಯ ಸಾಗರರಿವರು ;
ಭಕ್ತವಾತ್ಸಲ್ಯದೊಳಪರಾಧ ಸಹಿಸುವರು,
ಧರೆಯೊಳವತರಿಸಿರುವ ಮುಖ್ಯಮಾರುತರು ;

ಆಜ್ಞರಾಗಿಯೂ ಜ್ಞಾನ ಬೇಕೆಂಬ ಯೋಗ್ಯರಲಿ
ಭಗವತ್ಕೃಪಾಪಾತ್ರ ಸತ್ಸ್ವಭಾವಿಗಳಲಿ
ಕೃಪೆಯ ತೋರಲು ಇವರು ಬ್ರಹ್ಮರುದ್ರಾದಿಗಳ
ಪ್ರಾರ್ಥನೆಯ ಫಲವಾದ ಭಗವದಾಜ್ಞೆಯ ಶಿರದೊ
ಳಾದರದಿ ಘನ ಶಿರೋಮಣಿಯಂತೆ ಧರಿಸುತ್ತ,

ದೇವತೆಗಳೆಲ್ಲರೂ ಪ್ರಾರ್ಥನೆಯ ಮಾಡಲದ
ಹೃದಯದಲಿ ಹಾರದಂತಿಟ್ಟು, ತಮ್ಮವರಾದ
ಸರ್ವಸಜ್ಜನರಲ್ಲಿ ತಾವನುಗ್ರಹಮಾಡ
ಲೆಳಸಿ ಕರ್ಮಾವನಿಯೊಳವತಾರ ಮಾಡಿದರು;
ಅವತರಿಸಿ ಸಕಲ ಶಾಸ್ತ್ರಗಳನು ರಚಿಸಿದರು;
ಸರ್ವದುರ್ಮತಗಳನು, ಸಲೆಭಂಗಮಾಡಿದರು;
ಪ್ರಾಚೀನ ಸಾಂಪ್ರದಾಯಿಕ ವೈಷ್ಣವಾಚಾರ
ಚೆನ್ನಾಗಿ ನಿಲ್ಲಿಸಿದರು; ಅದರಿಂದಲೆ ಇವರು
ಭಗವತ್ಪ್ರಸಾದವನು ಲೇಸಾಗಿ ಸವಿಯುವರು;
ಭಗವಂತನಾಜ್ಞೆಯಲಿ ವಿಷ್ಣು ಸನ್ನಿಧಿಯಲ್ಲಿ
ಸರ್ವದಾ ಪೂಜೆಯನು ನಲವಿಂದ ಕೈಗೊಂಡು,
ಭಗವಂತನಿಂದ ಬಹು ವರಗಳನು ಪಡೆಯುವರು;

ಮೂವತ್ತು ಎರಡು ಸಲ್ಲಕ್ಷಣದಿ ಕೂಡಿರುವ
ಪೂರ್ಣಗುರುಲಕ್ಷಣಗಳಿವರಲ್ಲಿ ಕಂಡಿಹವು;
ಸಂಶಯದ ಸುಳಿವಿಲ್ಲ, ಭಕ್ತರಾ ಸಂಶಯಗ
ಳೆಲ್ಲವನು ಛೇದಿಸುವ ಸದ್ಗುರುಗಳಿವರು

ಪ್ರಣವವೆ ಮೊದಲಾದ ವಿಷ್ಣುಪರ ಮಂತ್ರಗಳ
ಉದ್ಧಾರ ಕರ್ತೃಗಳು; ಸರ್ವಕಾಲದಿ ಸರ್ವ
ವಿಷ್ಣುಮಂತ್ರಗಳನು ಜಪಿಸುತಲಿರುವವರು;
ಏಳು ಕೋಟಿಯ ಮಹಾ ಮಂತ್ರಗಳ ಜಪಸಿದ್ಧಿ
ಪಡೆದವರು; ಬಹು ಭಕ್ತಿಯಿಂದ ಭಗವಂತನಾ
ಔಪಸನಾರ್ಥವಾಗಿಚ್ಛಿಸುವ ರೂಪಗಳ
ತಮ್ಮ ಮನಸ್ಸಿಗೆ ತಂದು, ಒಂದೊಂದು ಕಡೆಯಲಿ
ಬೇರೆ ಬೇರೆಂಬಂತೆ ಕಾಂಬ ಭಗವಂತನಾ
ಗಣನೆಯಿಲ್ಲದ ರೂಪಗಳ ಕುರಿತು ವೇದಗಳು
ಹೇಳಿರುವ, ಹೇಳದೇ ಬಿಟ್ಟಿರುವ, ಭಾರತವು
ಹೇಳಿರುವ, ಹೇಳದೇ ಬಿಟ್ಟಿರುವ ಅರ್ಥಗಳ,

ಸಾಂಪ್ರದಾಯಿಕವಾಗಿ ತನಗೆ ತಾ ಬೇರೆನಿಸಿ
ಬೇರಲ್ಲದಿದ್ದರೂ ವ್ಯವಹಾರಕೊಳಗಾಗಿ,
ಸರ್ವ ಸಾಮರ್ಥ್ಯದಿಂದಮಿತಾಂತ್ಯವಿಲ್ಲದೆಯೆ
ನಿರ್ದೋಷ ಕಲ್ಯಾಣ ಗುಣಪರಿಪೂರ್ಣವಾಗಿರುವ
ಅನ್ನಂತ ಗುಣಗಳನು ತಾ ಸಮನ್ವಯಗೊಳಿಸಿ,
ಒಂದಾಗಿ ಕಂಡು ಸಮ್ಮುದದಿ ಪೂಜಿಸಬಲ್ಲ
ರಂತು ವೇದೋಕ್ತವಹ ಸರ್ವವಿಧ ಕರ್ಮಗಳ
ಮರ್ಮಗಳ ತಾವರಿತು ಭಗವಂತನಲ್ಲಿಯೇ
ಅವುಗಳುಪ ಸಂಹರಿಸಿ, ತದ್ರೀತಿ ಭಗವಂತ
ನಾನಂತರೂಪಗುಣಕ್ರಿಯೆ ಜಾತ್ಯವಸ್ಥೆಗಳ
ಪರಮ ದಯಾವಂತರು, ಕ್ಷಮಾ ಸಮುದ್ರರು ಇವರು,
ಭಕ್ತವತ್ಸಲರು, ಭಕ್ತಾಪರಾಧವ ಸಹಿಸಿ,
ತಮ್ಮ ಭಕ್ತರ ದುಷ್ಟ ಮಾರ್ಗದಿಂದುದ್ಧರಿಸಿ
ಸನ್ಮಾರ್ಗದಲ್ಲಿ ಭದ್ರವಾಗಿ ನಡೆಸುತಿಹರು;
ತಮ್ಮ ಭಕ್ತನು ಆದ ನನ್ನನುದ್ದೇಶಿಸುತ
ಭಗವಂತನನು ಕುರಿತು, 'ಪರಮದಯಪರಿಪೂರ್ಣ,
ಭಕ್ತವತ್ಸಲ, ಭಕ್ತರಪರಾಧ ಸಹಿಸುವನೆ,
ದೀನನಿವ ಬಳಲಿಹನು ರಕ್ಷಕರ ಕಾಣದಲೆ,
ರಕ್ಷಿಸು ಅನಾಥನನು ' ಎನುತ ಬಿನ್ನೈಸುವರು ;

ಎಲ್ಲ ಬಲ್ಲರ ಶಿರೋಭೂಷಣರು ಇವರಾಗಿ
ಎಲ್ಲ ಗುರುಗಳ ಒಳಗು ಅಂತರಾತ್ಮರಾಗಿ,
ಸರ್ವದಾ ಶ್ರೀಹರಿಯ ಮಹಿಮೆ ಚಿಂತಿಪರಾಗಿ
ಭಗವಂತನ್ಹೊರತು ಮತ್ತನ್ಯ ವಸ್ತುಗಳಲ್ಲಿ
ಸಂಗವನು ತೊರೆದು, ಸರ್ವತ್ರದಲಿ ಸರ್ವದಾ
ಸರ್ವ ಆಕಾರನು ಸರ್ವಕಾಧಾರನೂ
ಸರ್ವಕ್ಕು ಆಶ್ರಯನು ಸರ್ವದುದ್ಪಾದಕನು,
ಸರ್ವವನು ಪಾಲಿಪನು ಸರ್ವ ಸಂಹಾರಕನು

ಸರ್ವನೀಯಾಮಕನು ಸರ್ವ ಸಂಪ್ರೇರಕನು
ಸರ್ವ ಪ್ರವರ್ತಕನು ಸರ್ವಕೆ ನಿವರ್ತಕನು
ಬಗೆಬಗೆಯ ಜೀವರಾಯೋಗ್ಯತೆಗಳನುಸರಿಸಿ
ಜ್ಞಾನ ಮತ್ತಜ್ಞಾನ ಬಂಧ ಮೋಕ್ಷಗಳನ್ನು
ಕೊಡುವವನು, ಸರ್ವರಿಗು ಸತ್ತಾಪ್ರದಾಯಕನು
ಸರ್ವ ಶಬ್ದ ಸುವಾಚ್ಯ ಸರ್ವವಿಧ ಶಬ್ದಗಳ
ಉತ್ಪತ್ತಿಕಾರಣನು ಸರ್ವಗುಣ ಪೂರ್ಣತಮ
ಸರ್ವದೋಷವಿದೂರ ಸರ್ವದಾಚಿಂತ್ಯ ಸ
ರ್ವೇಶ್ವರನು ಸರ್ವರಿಗತಿವಿಲಕ್ಷಣನು
ಸ್ವಗತಭೇದ ವೀಹೀನನೆಂದು ಕಾಣುವರು.
ಅಭಿಮಾನ ಮೊದಲಾದ ದೋಷವರ್ಜಿತರಿವರು
ಮಾತ್ಸರ್ಯ ಮೊದಲಾದ ದೋಷಗಳ ಕಳೆಯುವರು;
ನಿತ್ಯರಮೆಯೊಡಗೂಡಿ ಇರುವ ಭಗವದ್ರೂಪ
ವಿವಿಧಗಳ ಅಪರೋಕ್ಷ ಮಾಡಿಕೊಂಡಿರುತಿಹರು;
ಆದರಿಂದಲೇ ಸಕಲ ಪ್ರಕೃತಿ ಬಂಧಗಳನ್ನು
ಕಳೆದುಕೊಂಡು ಅನಿಷ್ಟವೆಲ್ಲವನು ತೊಲಗಿಸಿಯೆ,
ಭಕ್ತರ ಅನಿಷ್ಟಗಳ ಕಳೆಯಬಲ್ಲವರು;
ಪ್ರಣವ ಮಂತ್ರದ ಉಪಾಸಕರು, ನಮೆಗೆಲ್ಲರಿಗು
ಆದಿಗುರುಗಳು ಶ್ರೀಮದಾನಂದ ತೀರ್ಥರು

ಇವರೊಳಗೆ ನೀನು ಅಂತರ್ನಿಯಾಮಿಯಾಗಿರುವಿ,
ಅನಿರುದ್ಧ ಪ್ರದ್ಯುಮ್ನ ಸಂಕರ್ಷಣನು ಮತ್ತೆ
ವಾಸುದೇವಾತ್ಮಕನು ಶ್ರೀಮಧ್ವವಲ್ಲಭಾ !
ಶ್ರೀಲಕುಮಿ ಸಹಿತ ವೇದವ್ಯಾಸ ರೂಪಕನು,
ಬ್ರಹ್ಮಾಂಡ ಸಂಸ್ಥಿತ ಅನಂತ ರೂಪಗಳಿಂದ
ಕೂಡಿರುವ ರಮೆಯೊಡನೆ ಕ್ಷೀರಾಬ್ಧಿವರಶಾಯಿ
ಶ್ರೀಪದ್ಮನಾಭಾ ಚಿದಾನಂದ ರೂಪಾ !

ಬ್ರಹ್ಮಾಂಡ ಬಹಿರದಲಿ ಶುದ್ಧ ಸೃಷ್ಟಿಯಗೈದು,
ಶ್ರೀಚತುರ್ಮುಖ ಮುಖ್ಯಪ್ರಾಣರಿಂ ನುತಿಗೊಳುತ,
ಅವರುಪಾಸನೆಯೇ ಪ್ರಯೋಜನವು ಆಗಿರುವ
ಅಂತವಿಲ್ಲದನಂತ ಮೂಲರೂಪನು ಆಗಿ
ಈ ಸಮಸ್ತ ಜಗತ್ತು ಪಾಲಿಸುವ ಕಾರಣದಿ
ಶಾಂತಿದೇವಿಯ ರಮಣ ಸ್ವಾಮಿ ಅನಿರುದ್ಧಾ !

ಮೂಲರೂಪದೊಳಿದ್ದು ಜಗವ ನಿರ್ಮಿಸುವಂಥ
ಕಾರಣದಿಕೃತಿಪತಿಯು ನೀನೆ ಪ್ರದ್ಯುಮ್ನಾ!
ಮೂಲರೂಪನೆ ಆಗಿ ಜಗವ ಸಂಹರಿಪ ಕಾ
ರಣದಿಂ ಜಯಾಪತಿಯು, ಸಂಕರ್ಷಣಾಖ್ಯಾ !

ಈ ರೀತಿಯಿಂದಲೇ ಮೂಲರೂಪನು ಆಗಿ
ಅವರವರ ಯೋಗ್ಯತೆಗಳರಿವುತ್ತ ಚೆನ್ನಾಗಿ
ಪರಮಾತ್ಮನಾಜ್ಞೆಯಲಿ ಮಹದನುಗ್ರಹಶೀಲ
ಬ್ರಹ್ಮಾದಿ ಸದ್ಗುರುಗಳುಪದೇಶವನು ಪಡೆದು.
ತಂತಮ್ಮ ಯೋಗ್ಯತದಿ ಭಗವಂತನಾ ರೂಪ
ದರ್ಶನದಿ ಇಷ್ಟವಲ್ಲದ ಸಂಚಿತವ ಕಳೆದು,
ಭೋಗದಿಂ ಪ್ರಾರಬ್ಧ ನಿಶ್ಶೇಷ ಗೊಳಿಸುತ್ತ,
ತಂತಮ್ಮ ಯೋಗ್ಯತೆಯ ಸಾಧನೆಯ ಪೂರ್ತಿಸುತ,
ಗತಕಲ್ಪದಲಿ ಬ್ರಹ್ಮನೊಡನೆ ವಿರಜಾ ಸ್ನಾನ
ಮಾಡಿ ಲಿಂಗಶರೀರ ಕಳೆದುಕೊಂಡವರಾಗಿ,
ಉಳಿದಿಷ್ಟ ಪುಣ್ಯಪ್ರಾರಬ್ಧವೆಲ್ಲವ ನೀಗಿ,
ಪ್ರಳಯ ಕಾಲದಲಿದ್ದು ಭಗವಂತನುದರದಲಿ,
ಆನಂದಮಯವಾದ ದೇಹವಿರುತಿದ್ದರೂ
ಆನಂದದನುಭವವು ಇಲ್ಲದೆಲೆ ತಂತಮ್ಮ
ಯೋಗ್ಯತೆಗಳುನುಸಾರ ಭಗವಂತನಾರೂಪ
ವೈಶಿಷ್ಟ್ಯ ಕಾಣುತ್ತ ಧ್ಯಾನ ತತ್ಪರರಾಗಿ,

ಸೃಷ್ಟಿ ಕಾಲವು ಬರಲು ಭಗವಂತನುದರದಿಂ
ಹೊರಗೆ ಬಂದಿರಲಾಗ ಶ್ರೀ ಶ್ವೇತ ದ್ವೀಪವನು
ಕಾಣಿಸುವ ಕತದಿಂದ ನಿನ್ನಿಚ್ಛೆಯಾವರಣ
ದೂರಮಾಡುತ ಅವರ ಯೋಗ್ಯತೆಗಳನುಸಾರ
ಆನಂದದನುಭವಕೆ ಮುಕ್ತಿ ಯೆಂಬುವಸ್ಥಾನ
ಕೊಟ್ಟು ಸುಖನೀಡುವಾ ದೇವಿಮಾಯಾರಮಣ
ಶ್ರೀ ವಾಸುದೇವಾ ಸದಾನಂದ ರೂಪಾ !

ಲಕ್ಷ್ಮಿರೂಪದ ಆಲದೆಲೆಯ ಮೇಲ್ಮಲಗಿದ್ದು
ಜಗವೆಲ್ಲ ಉದರದಲಿ ಇಟ್ಟುಕೊಂಡಿರುವವನೆ,
ನಾಭಿ ದೇಶದ ಮೇಲೆ ಕುಕ್ಷಿಪ್ರದೇಶದಲಿ
ಮುಕ್ತ ಜೀವರನಿಟ್ಟು, ನಾಭಿ ದೇಶದೊಳೆಲ್ಲ
ಸಂಸಾರಿ ಜೀವರನು, ನಾಭಿ ಕೆಳಭಾಗದಲಿ
ತಮಕೆ ಬಿದ್ದವರನು ಇಟ್ಟುಕೊಂಡಿರುವವನೆ;
ಶ್ರೀ ಭೂಮಿ ದೇವಿಯರ ಆಲಿಂಗಿಸಿರುವವನೆ,

ಕಾಲಾದಿ ಎಲ್ಲವನು ನಡೆಸುತ್ತಲಿರುವವನೆ,
ಪರಮ ಸೂಕ್ಷ್ಮದ ಕಾಲದವಯವಗಳಲ್ಲಿಹನೆ,
ಪರಮ ಪುರುಷನು ಎಂಬ ಹೆಸರಿನಿಂದಿರುವವನೆ,
ಶ್ರೀ ಚತುರ್ಮುಖ ಮುಖ್ಯಪ್ರಾಣರು ಉಪಾಸಿಸುವ
ಶ್ರೀ ಚರಣವುಳ್ಳವನೆ ಅನಿರುದ್ಧ ಮೊದಲಾದ
ನಾಲ್ಕುರೂಪಾತ್ಮಕನೆ ಗಾಯತ್ರಿ ನಾಮಕನೆ,
ಸವಿತೃ ನಾಮವನುಳ್ಳ ವ್ಯಾಪ್ತರೂಪಾತ್ಮಕನೆ,
ಬೃಹತು ಕಾಯವನುಳ್ಳ ಶೂನ್ಯನಾಮಕ ನೀನು,
ಅನಂತ ನಾಮಕನು, ಸಮರಧಿಕರಿಲ್ಲದಿಹ
ವ್ಯಾಪ್ತರೂಪನು ಎಂದು ತಿಳಿಸಿಕೊಳ್ಳುತಲಿರುವೆ,
ಅನಂತ ತೇಜಮಯ ರೂಪಗಳನುಳ್ಳವನೆ,
ಆ ರೂಪಗಳ ಕೂಡಿ ರಮೆಯ ರೂಪಗಳಿಹವು ;
ಗಾಯತ್ರಿ ಭೂತವಾಕ್ ಪೃಥ್ವಿ ತನು ಹೃದಯಗಳ

ಭೇದದಿಂ ಷಡ್ವಿಧದ ಗಾಯತ್ರಿ ನಾಮಕನೆ;

ಲೋಕ ವೇದ ಸಮೀರ ರಮೆಯ ಸಂಗತಿಯುಳ್ಳ

ಪ್ರಣವ ರೂಪದ ನಾಲ್ಕು ಪಾದದಿಂ ಕೂಡಿರುವ

ಗಾಯತ್ರಿ ಪಾದ ಚತ್ವಾರದಿಂ ಬೋಧಿತನೆ ;

ವೈಕುಂಠದಲಿ ಅನಂತಾಸನದಿ ಇರುವೆ, ಶ್ವೇ

ತದ್ವೀಪ, ಜೀವರಲಿ ರೂಪಭೇದಗಳಿಂದ

ನಾಲ್ಕು ರೂಪಾತ್ಮಕನು, ದೇಹದಲಿ ತುಂಬಿರುವ

ಜೀವ ರಂತರ್ಯಾಮಿ, ಸರ್ವ ಶಬ್ದಗಳಿಂದ

ಬೋಧಿತನು ನೀನಾಗಲೌಪಚಾರಿಕವಲ್ಲ ;

ಶಂಖಚಕ್ರವು ವರದ ಅಭಯ ಹಸ್ತವನುಳ್ಳ

ಕಾಂತಿರಂಜಿತ ಸರ್ವ ಆಭರಣ ಭೂಷಣದಿ

ವಿಶ್ವಾದಿ ಎಂಟು ಭಗವದ್ರೂಪ ತೋರುತಿಹ

ಶ್ರೀ ದೇವಿ ಮೊದಲಾದ ಎಂಟು ಲಕ್ಷ್ಮೀ ರೂಪ

ನೆಲೆಸಿದಾಕಾರದಿ ಅಷ್ಟಾಕ್ಷರಾತ್ಮಕದ

ಶ್ರೀಪ್ರಣವ ಮೊದಲಾದ ಅಷ್ಟ ಮಹಮಂತ್ರಗಳು

ಪ್ರತಿಪಾದಿಸುವ ಎಂಟು ರೂಪವುಳ್ಳವ ನೀನು;

ಮಂತ್ರದಧ್ಯಾಯದಲಿ ಉಕ್ತವಾಗಿರುವಂಥ

ಭೂವರಾಹಾದಿಯಹ ವಿಷ್ಣುಮಂತ್ರಗಳಿಂದ

ಪ್ರತಿಪಾದ್ಯಮಾನ ಭೂವರಹಾದಿರೂಪವನೆ ;

ರಮೆಯ ಪೆಸರುಗಳಿಂದ ಅವುಗಳಲ್ಲಿರುತಿಹನೆ;

ಶ್ರೀ ಲಕ್ಷ್ಮಿ ನರಸಿಂಹ ಪರಮ ದಯಾವಂತಾ !

ಕ್ಷಮೆಯ ಸಾಗರ ನೀನು, ಭಕ್ತವತ್ಸಲ ನೀನು

ಭಕ್ತರಪರಾಧ ಸಹಿಸುವೆ ದೇಶ ಕಾಲ ಪತಿ,

ದೇಹೇಂದ್ರಿಯಾಧಿಪತಿ, ಸೂರ್ಯವಂಶಧ್ವಜಾ,

ರಘುವಂಶ ತಿಲಕನೆ, ಸೌಮಿತ್ರಿ ಭರತರಾ

ಶತ್ರುಘ್ನನನುಜ, ಶ್ರೀಹನುಮ ಸೇವಿತ ಚರಣ,

ಸೀತಾಪತೇ ಸ್ವಾಮಿ ಶ್ರೀರಾಮಚಂದ್ರ !

ನಿನ್ನಾಜ್ಞೆಯನುಸರಿಸಿ, ನಿನ್ನನುಗ್ರಹದಿಂದ,
ನಿನ್ನನುದ್ದೇಶಿಸುತ, ನಿನ್ನನ್ನು ಸ್ಮರಿಸುತ,
ನಿನ್ನಾಜ್ಞೆಯಿಂದ ನಿಯಮಿತರಾದ ಗುರುವರರು
ನನಗೆ ನೀಯಾಮಕರು, ಸತ್ತಾಪ್ರದಾಯಕರು
ವಾಯುನಾಮಕರಿವರು, ಚೇಷ್ಟಾಪ್ರದಾಯಕರು
ಪ್ರಾಣನಾಮಕರಿವರು, ಧಾರಣಾಪ್ರದರಾದ
ಧರ್ಮನಾಮಕರಿವರು, ಮುಕ್ತಿಪ್ರದಾಯಕರು
ಭಕ್ತಿನಾಮಕರಿವರು, ರೂಪಭೇದಗಳಿಂದ
ಪರಮದಯವಂತರಾಗೆನ್ನ ಹೃದಯದೊಳಿಹರು ;
ಕ್ಷಮೆಯ ಸಾಗರರಿವರು, ಭಕ್ತರಿಗತಿಪ್ರಿಯರು,
ಭಕ್ತರಪರಾಧಗಳ ಎಣಿಸದೆಯೆ ಸಹಿಸುವರು;
ಸರ್ವಕ್ಕು ಪ್ರೇರಕರು, ಸರ್ವ ತಾತ್ವಿಕ ದೈವ
ಗಣಕೆ ಪ್ರೇರಕರಿರುವರು, ಸರ್ವ ತಾತ್ವಿಕ ದೈತ್ಯ
ವೃಂದ ಭಂಜಕರಿವರು, ಈ ವಿಧದಿ ಪ್ರೇರಿಸುತ
ಎಲ್ಲ ದುರ್ಮತಗಳನು ಭಂಗಪಡಿಸುತ್ತಿಹರು,
ಆದಕಾರಣ ಪ್ರಭಂಜನರೆಂದು ಕರೆಸುವರು;
ಪ್ರತಿದಿನವು ಪ್ರತಿಕ್ಷಣದಿ ಬುದ್ಧಿಶೋಧಕರಾಗಿ,
ಸರ್ವಕರ್ಮಗಳಿಗೂ ಯಜಮಾನರಿವರಾಗಿ,
ಸರ್ವಕರ್ಮದ ಸಮರ್ಪಣೆಗೈಯುವವರಾಗಿ,
ಸರ್ವಕರ್ಮದ ಫಲವನುಂಡು ಉಣಿಸುವರಾಗಿ,
ಸರ್ವವಿಧಕರ್ಮಗಳ ಪ್ರೇರಕೋದ್ಬೋದಕರು,
ಸರ್ವಕರ್ಮವ ಶುದ್ಧಿಗೊಳಿಪ ಸಿದ್ಧಿಪ್ರದರು.
ಸರ್ವಕರ್ಮಗಳಲ್ಲಿ ಶ್ರದ್ಧೆಯುಳ್ಳವರಿವರು,
ಸರ್ವ ಕರ್ಮಕೆ ಸಾಕ್ಷಿ, ಸರ್ವ ಕರ್ಮಗಳಲ್ಲಿ
ಸುಪ್ರತಿಷ್ಠಿತನಾದ ಭಗವಂತನಾ ವಿವಿಧ
ರೂಪಗಳುಪಾಸಿಪರು ; ಸಕಲ ವಿಧಜೀವರಿಗೆ

ಆದಿಯಿಲ್ಲದೆ ಅಂಟಿಕೊಂಡಿರುವ ಧರ್ಮವ
ತ್ತನ್ಯಧರ್ಮವ ಬಲ್ಲ ಸರ್ವಸ್ವತಂತ್ರ ಶ್ರೀ

ಹರಿಯ ಇಚ್ಛೆಯಾಳವನು ಉದ್ಬೋಧಗೊಳಿಸುತ್ತ
ಧರ್ಮಗಳಧರ್ಮಗಳ ಪಾಕ ಕರ್ತೃವು ಆದ
ಕಪಿಲರೂಪಿಯನುಪಾಸನೆ ಮಾಳ್ಪರಿವರು;

ರಮೆಯ ಹೊರತು ಪ್ರಸಿದ್ಧ ಮಂತ್ರಗಳ ಹೊರತಾಗಿ,
ಅನ್ನಂತವಾಗಿರುವ ಸಕಲ ವೇದಗಳಿಂದ
ಮುಖ್ಯಪ್ರತಿಪಾದ್ಯರನ್ನಂತ ಗುಣವುಳ್ಳವರು,
ಸರ್ವದೋಷವಿದೂರರಾಗಿ, ನಿನ್ನಯ ಚಿತ್ತ
ಚೆನ್ನಾಗಿ ತಿಳಿದು ಅದರನುಸಾರವಾಗಿಯೇ
ಚಿತ್ತವುಳ್ಳವರಾಗಿ, ನಿನ್ನ ಪರಮಾದರಾ
ನುಗ್ರಹಕೆ ಪಾತ್ರರೈ, ನನ್ನ ಯೋಗ್ಯತೆಯನು
ಚೆನ್ನಾಗಿ ಬಲ್ಲವರು, ಶ್ರೀ ಭಾರತೀಪ್ರಿಯರು,
ರುದ್ರಾದಿದೇವತೋಪಸಿತ ಮಹಚ್ಚರಣ
ರೆನ್ನ ಸಕಲಾವಸ್ಥೆಯಲ್ಲಿ ಚಿತ್ರವಿಚಿತ್ರ
ನಿನ್ನುಪಾಸನೆಯನ್ನು ಮಾಡುವವರಾಗಿರುವ
ಶ್ರೀಮುಖ್ಯಮರುತರಿಂ ಪ್ರೇರಿತನು ನಾನಾಗಿ,

ನಿನ್ನ ಸಂಸ್ಮರಣೆಯನು ಮಾಡುತ ನಿದ್ರೆಯಿಂ
ದೆಚ್ಚೆತ್ತು, ದಿವಸದಲಿ ಮಾಡಬೇಕಾಗಿರುವ
ಸಕಲ ವರ್ಣೋಚಿತವು ದೇಶಕಾಲಾವಸ್ಥೆ
ಗುಚಿತವೆನಿಸುವ ನಿತ್ಯ ನೈಮಿತ್ತಿಕವು ಮತ್ತೆ
ಕಾಮ್ಯಭೇಧಗಳಿಂದ ಮೂರು ಬಗೆಯಾಗಿರುವ
ನಿನ್ನ ಪೂಜಾರೂಪ ಕರ್ಮಗಳನಾಪನಿತು
ಶಕ್ತಿಯಿಂ ಜ್ಞಪ್ತಿಯಿಂ ವೈಭವದಿ ಮಾಡುವೆನು;
ಅಂತೆ ನನ್ನಾಜ್ಞಾನುವರ್ತಿ ಜನರಿಂದಲೂ
ವಿದ್ಯೆ ಸಂಬಂಧಿಗಳು ದೇಹ ಸಂಬಂಧಿಗಳು
ಎನಿಸಿ ನಿನ್ನವರಾದ ಸಕಲ ಜನರಿಂದಲೂ,
ನೀನೆ ಸರ್ವಕೆ ಕರ್ತಕಾರಯಿತನೆಂದೆಂಬ
ಚಿಂತನೆಯ ಬಿಡದೆ ಮಾಡಿಸುವೆನವರಿಂದ

ಇಂತು ಶ್ರೀರಾಘವೇಂದ್ರ ಯತಿ ಮಾಡಿದ ಚಂದದಿ ಪ್ರಾತಃ ಸಂಕಲ್ಪಗದ್ಯ ಮಧ್ವಮಾಧವ ತುಷ್ಟಿಗೆ

ಕನ್ನಡದ ಈ ಪದ್ಯರೂಪವನ್ನು ರಚಿಸಿದ ನನ್ನ ಗುರುಗಳಾದ ದಿವಂಗತ
ವಿ. ಬಾದರಾಯಣಮೂರ್ತಿಯವರ ಅಡಿದಾವರೆಗಳಲ್ಲಿ ಈ ಕುಸುಮದ ಸಮರ್ಪಣೆ

